# ಭಾವಪೂರ್ಣ ಮುಖ್ಯಶಿಕ್ಷಕನೊಬ್ಬನ ಕಥೆ: ಹೊಣೆಯರಿತ ಮನುಷ್ಯ

ಮೊಹಮ್ಮದ ಜಾಫರ್

ಕಲಿಯಲು ಮತ್ತು ಹಂಚಿಕೊಳ್ಳಲು ಬೇಕಾದ ಆರೋಗ್ಯಕರ ವಾತಾವರಣ ನಿರ್ಮಿಸುವಲ್ಲಿ, ವಿದ್ಯಾರ್ಥಿಗಳ ಸಮಸ್ಯೆಗಳನ್ನರಿಯಲು, ವಿವಿಧ ರೀತಿಗಳಿಂದ ಅವರಿಗೆ ಬೆಂಬಲ ನೀಡಲು ಅದಕ್ಕೂ ಹೆಚ್ಚಾಗಿ ತಮ್ಮನ್ನು ತಾವು ತೆರೆದುಕೊಳ್ಳಲು, ನಲಿಯಲು ಮತ್ತು ಕಲಿಯಲು ಮುಕ್ತವಾದ ಪರಿಸರ ಕಲ್ಪಿಸುವಲ್ಲಿ ಶಿಕ್ಷಕರ ಪ್ರಮುಖ ಪಾತ್ರವನ್ನು ರಾಷ್ಟ್ರೀಯ ಶಿಕ್ಷಣ ನೀತಿ 2005 ತಿಳಿಸಿದೆ. ವಿವಿಧ ಚಿಂತಕರು ಮತ್ತು ಶಿಕ್ಷಣತಜ್ಞರ ಪ್ರಕಾರ ಸ್ವತಂತ್ರ ಮತ್ತು ಭಯವಿಲ್ಲದ ವಾತಾವರಣ ಮತ್ತು ಅದರೊಟ್ಟಿಗೆ ಸಂಪನ್ಮೂಲಗಳ ಹಾಗೂ ಕಲಿಕಾ ಸಾಮಗ್ರಿಗಳು ಇರುವ ಆರೋಗ್ಯಕರ ಪರಿಸರವು, ಶಾಲೆಯ ಕಲಿಕಾ ವಾತಾವರಣವನ್ನು ಗಟ್ಟಿಗೊಳಿಸುತ್ತದೆ. ಇಂತಹ ಮುಖ್ಯವಾದವುಗಳನ್ನು ಶಾಲೆಗೆ ತರುವುದು ಪ್ರತಿಯೊಬ್ಬ ಶಿಕ್ಷಕರ ಜವಾಬ್ದಾರಿಯಾದರೂ, ಒಂದು ಗುಣಾತ್ಮಕ ಹಾದಿಯನ್ನು ಇಡೀ ಶಾಲೆಗೆ ಕಟ್ಟಿಕೊಡಬಹುದಾದ್ದರಿಂದ, ಮುಖ್ಯೋಪಾಧ್ಯಾಯರ ಪಾತ್ರ ಪ್ರಮುಖವಾಗುತ್ತದೆ. ನಾನು ಕಾರ್ಯ ನಿರ್ವಹಿಸುವ ಕ್ಷೇತ್ರದಲ್ಲಿ ಚೈತನ್ಯಶೀಲ ಮುಖ್ಯ ಶಿಕ್ಷಕರೊಬ್ಬರು ನಿವೃತ್ತರಾದರು. ಅವರು ಚಟುವಟಿಕೆಯಿಂದಿರುತ್ತಿದ್ದ ಅವರ ಶಾಲೆಯಲ್ಲಿ ಮತ್ತು ಇತರ ವೇದಿಕೆಗಳಲ್ಲಿ ಅವರಿಲ್ಲದೇ, ಅವರ ಬಗ್ಗೆ ತಿಳಿದ ಇತರರಿಗೂ ಹಾಗೂ ನನಗೂ ಭಣ ಭಣ ಎನಿಸುತ್ತಿದೆ. ಶ್ರೀ ಸತ್ಯಪಾಲರು ಪುರೋಲ ಕ್ಷೇತ್ರ(ಉತ್ತರ ಕಾಶಿ)ದ ಸುನಾಲಿಯ ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯ ಶಿಕ್ಷಕರಾಗಿದ್ದರು. ಅದಕ್ಕೂ ಮುಂಚೆ ಅವರು ಎಲ್ಲೆಲ್ಲಿ ಕೆಲಸ ಮಾಡಿದ್ದರೋ ಅಲ್ಲೆಲ್ಲ ಅವರು ಸಮುದಾಯದೊಟ್ಟಿಗೆ ಉತ್ತಮ ಬಾಂಧವ್ಯ ಹೊಂದಿದ್ದರು. ಈ ಗಟ್ಟಿ ಬಾಂಧವ್ಯ ಸುನಾಲಿಯಲ್ಲೂ ಇತ್ತೆಂಬುದನ್ನು ಅವರ ಬೀಳ್ಕೊಡುಗೆ ಸಮಾರಂಭ ನಿರೂಪಿಸಿತು.

ಅವರ ನಿವೃತ್ತಿಗೆ ಕೇವಲ ಎರಡು ವರ್ಷ ಇದ್ದಾಗಲೂ ಕೂಡ ಅವರು ಸೇವಾನಿರತ ಶಿಕ್ಷಕರ ತರಬೇತಿ ಕಾರ್ಯಕ್ರಮವೊಂದರಲ್ಲಿ ಬಹಳ ಚಟುವಟಿಕೆಯಿಂದ ಪಾಲ್ಗೊಂಡಿದ್ದನ್ನು ನೋಡಿದ್ದೆ. ಅವತ್ತಿನ ತರಬೇತಿ ಅವಧಿಯ ಬಗೆಗಿನ ಒಂದು ಕಿರುನಾಟಕದಲ್ಲಿ ಭಾಗವಹಿಸಿದ್ದರು. ಎಲ್ಲ ಮುಖ್ಯ ವಿಷಯಗಳ ಚರ್ಚೆಯಲ್ಲಿ ತಮ್ಮ ಅಭಿಪ್ರಾಯಗಳನ್ನು ಹಂಚಿಕೊಳ್ಳುವಲ್ಲಿ ಹಿಂಜರಿಯಲಿಲ್ಲ. ನಾನು ಅವರೊಡನೆ ಊಟದ ಸಮಯದಲ್ಲಿ ಮಾತನಾಡುತ್ತಿದ್ದಾಗ ಶಾಲೆಗಳಲ್ಲಿನ ಕಲಿಸುವ-ಕಲಿಯುವ ಸಮಸ್ಯೆ ಮತ್ತು ಸೇವಾವಧಿಯ ತರಬೇತಿ ಕಾರ್ಯಾಗಾರಗಳ ಗುಣಮಟ್ಟದ ಬಗ್ಗೆ ಅವರು ಮಾತನಾಡಿದರು. ಬಹಳ ಆಸಕ್ತಿ ಹುಟ್ಟಿಸುವ ವ್ಯಕ್ತಿ ಎಂದೆನಿಸಿತು. ಹದಿಹರೆಯದ ವಯಸ್ಸಿನ ಸಮಸ್ಯೆಗಳ ಬಗ್ಗೆ ಮಾತನಾಡಿದಾಗ, ಅವರು ಮಕ್ಕಳೊಡನೆಯೇ ಹದಿಹರೆಯದ ಸಮಸ್ಯೆಗಳ ಬಗ್ಗೆ ಮಾತನಾಡಬೇಕು, ಈ ಅವಧಿಯಲ್ಲಿ ಅವರಿಗೆ ಕಾಳಜಿಯ ಅಗತ್ಯ ಮುಖ್ಯವಾಗಿರುತ್ತದೆ ಎಂದೂ ಅಭಿಪ್ರಾಯ ಪಟ್ಟರು. ನಾವು ಆ ಸಮಯದ ದೈಹಿಕ ಬದಲಾವಣೆಗಳ ಬಗ್ಗೆ ಮಾತನಾಡಬೇಕು, ಹುಡುಗರು ಹುಡುಗಿಯರು ಕಲೆತಿರುವಂತೆ ಮಾಡಿ ಉತ್ತಮ ಸಹವರ್ತಿಗಳಾಗಿರುವಂತೆ ಪ್ರೋತ್ಸಾಹಿಸಿಬೇಕು, ಇಲ್ಲದಿದ್ದರೆ, ಈ ವಯಸ್ಸು, ಬಹಳಷ್ಟು ಮಾನಸಿಕ ಸಮಸ್ಯೆಗಳನ್ನು ಹುಟ್ಟುಹಾಕಬಲ್ಲದು ಎಂದರು.

ಕೆಲವು ತಿಂಗಳ ನಂತರ ನನಗೆ ಅವರ ಶಾಲೆಗೆ ಭೇಟಿ ನೀಡುವ ಅವಕಾಶ ಒದಗಿ ಬಂದಿತು. ಶಾಲೆಯೇನೋ ಇತರ ಶಾಲೆಗಳಂತೆಯೇ ಕಂಡಿತು. ಆದರೆ ಮಕ್ಕಳೊಡನೆ ಮಾತನಾಡಿದಾಗ ಮಕ್ಕಳು ಚೆನ್ನಾಗಿ ಲವಲವಿಕೆಯಿಂದಿದ್ದು ಗೌರವಪೂರ್ವಕವಾಗಿಯೂ ಮತ್ತು ಶೈಕ್ಷಣಿಕ ಆಸಕ್ತಿ ಉಳ್ಳವರಾಗಿಯೂ ಕಂಡರು. ಅವರ ನಿರಾತಂಕ ನಡವಳಿಕೆ, ಅವರ ಶಿಕ್ಷಕರು ಅವರನ್ನು ಶಿಸ್ತಿನ ಉರುಳಿಗೆ ಸಿಲುಕಿಸಿಲ್ಲ ಎಂಬುದನ್ನು ಬಿಂಬಿಸುತ್ತಿತ್ತು. ಆ ದಿನ ನಾನು ಮಕ್ಕಳೊಂದಿಗೆ ಆಮ್ಲ ಮತ್ತು ಪ್ರತ್ಯಾಮ್ಲದ ಲಿಟ್ಮಸ್ ಕಾಗದದ ಪರೀಕ್ಷೆಯ ಬಗ್ಗೆ ವಿಷಯ ಹಂಚಿಕೊಳ್ಳುತ್ತಿದ್ದೆ. ಮುಖ್ಯೋಪಾಧ್ಯಯರಾಗಿ ಅವರು ಹೆಜ್ಜೆ ಹೆಜ್ಜೆಗೂ ಬಹಳಷ್ಟು ಸಹಾಯ ಮಾಡಿದರು. ಕಪಾಟಿನಿಂದ ಲಿಟ್ಮಸ್ ಕಾಗದ ತಂದುಕೊಟ್ಟರು, ಮಕ್ಕಳೊಂದಿಗೆ ನಿಂತಿದ್ದು ಅವರನ್ನು ಹುರಿದುಂಬಿಸಿದರು ಮತ್ತು ಅವರು ಲಿಟ್ಮಸ್ ಕಾಗದದಲ್ಲಿ ಪರೀಕ್ಷೆ ನಡೆಸಿದಾಗ ಮೆಚ್ಚುಗೆಯ ಮಾತನ್ನಾಡಿದರು. ಅವರು ನನಗೆ ಸಾಕಷ್ಟು ಲಿಟ್ಮಸ್ ಕಾಗದ ನೀಡಿ, "ಸರ್, ಅವರಿಗೆ ಹೆಚ್ಚು ಹೆಚ್ಚು ಲಿಟ್ಮಸ್ ಕಾಗದ ಕೊಡಿ, ಅವರು ಹೆಚ್ಚಿನ ಪರೀಕ್ಷೆಗಳನ್ನು ಮಾಡಲಿ, ನಮ್ಮಲ್ಲಿ ಸಾಕಷ್ಟು ಲಿಟ್ಮಸ್ ಕಾಗದ ಇದೆ ಮತ್ತು ಅವು ಇರುವುದು ಮಕ್ಕಳಿಗಾಗಿಯೇ. ಅವರು ಉಪಯೋಗಿಸುತ್ತಿರುವುದು ಬಹಳ ಒಳ್ಳೆಯದು". ಎಂದು ಹೇಳಿದರು.

ವಿದ್ಯಾರ್ಥಿಗಳ ಕಲಿಕಾ ವಿಷಯದ್ದಾಗಿರಲಿ, ಗಣಿತದ ಹಬ್ಬ ಇರಲಿ, 8ನೇ ತರಗತಿಯ ಮಕ್ಕಳ ಬೀಳ್ಕೊಡುಗೆ ಇರಲಿ ಅವರು ಸ್ವಂತ ಇಚ್ಛೆಯಿಂದಲೇ ಶಾಲೆಯ ಎಲ್ಲ ಕಾರ್ಯಕ್ರಮಗಳಲ್ಲೂ ಭಾಗವಹಿಸುತ್ತಾರೆ. ಅವರ ನಿವೃತ್ತಿಗೆ ಕೇವಲ ಒಂದು ವರ್ಷ ಇದ್ದಾಗ ಅವರು 'ನಾನಿದನ್ನು ಒಂದು ವರ್ಷ ಎಂದು ಭಾವಿಸುವುದಿಲ್ಲ. 365 ದಿನದಂತೆ ನೋಡುತ್ತೇನೆ' ಎಂದು ಹೇಳಿದರು. ಈ ಮಾತಿನಿಂದಲೇ ಅವರ ಒಳಗಿನ ತುಡಿತ ಹೊರಹೊಮ್ಮುತ್ತಿತ್ತು. ಪಠ್ಯದಲ್ಲಿನ ಚಟುವಟಿಕೆಗಳ ಆಧಾರದಲ್ಲಿ ಅವರು ಒಂದಷ್ಟು ಸ್ಲೈಡ್ ತಯಾರಿಸುವುದು ಮತ್ತು ಅದಕ್ಕೆ ಧ್ವನಿ ನೀಡುತ್ತಿದ್ದುದನ್ನು ನೋಡಿದೆ. ಅಂತರ್ಜಾಲದಿಂದ ಅವರು ಹಣ್ಣು, ತರಕಾರಿ, ಅಂಗಾಂಗಗಳು ಮುಂತಾದವುಗಳ ಚಿತ್ರಗಳನ್ನು ಇಳಿಸಿಕೊಂಡು ಅದರ ಹಿಂದೀ ಮತ್ತು ಇಂಗ್ಲೀಷ್ ಅರ್ಥಗಳನ್ನು ಸ್ಲೈಡ್ನಲ್ಲಿ ಬರೆದ ನಂತರ ಧ್ವನಿಯ ಮೂಲಕ ಇಂಗ್ಲೀಷ್ ಮತ್ತು ಹಿಂದಿಯಲ್ಲಿ ಓದಿ ಸ್ಲೈಡ್ಗಳಲ್ಲಿ ಧ್ವನಿ ಮುದ್ರಿಸುತ್ತಿದ್ದರು. ಅವರು ಇಂಗ್ಲೀಷ್, ಹಿಂದೀ ಪಠ್ಯದಲ್ಲಿನ ಚಟುವಟಿಕೆಗಳು, ಕ್ಲಿಷ್ಟ ಪದಗಳು, ವ್ಯಾಕರಣ, ಕಾಲಗಳು ಇತ್ಯಾದಿಗಳನ್ನು ಮಕ್ಕಳಿಗೆ ಸುಲಭಗೊಳಿಸಲು ಹೇಗೆ ಹೆಣಗುತ್ತಿದ್ದರು ಎಂಬುದಕ್ಕೆ ಇದು ಒಂದು ಉದಾಹರಣೆಯಷ್ಟೇ . ಅವರು ತಂತ್ರಜ್ಞಾನವನ್ನುಪಯೋಗಿಸಿಕೊಂಡು ಪಾಠದಲ್ಲಿನ ವಿಷಯಗಳ್ನು ಮಕ್ಕಳಿಗೆ ಆಸಕ್ತಿಕರವಾಗುವಂತೆ ಮಾಡುತ್ತಾರೆ. ಪ್ರತೀ ತರಗತಿಯ ಮಕ್ಕಳೂ ಕಂಪ್ಯೂಟರ್, ವಿಡಿಯೋ ಕೊಠಡಿಯಲ್ಲಿ ದೃಶ್ಯದ ಮೂಲಕ ಒಂದು ಅವಧಿಯಲ್ಲಿ ಇವರ ನೇತೃತ್ವದಲ್ಲಿ ಕಲಿಯುತ್ತಾರೆ . ಮತ್ತೊಂದು ಬಾರಿ ಅವರ ಸಹೋದ್ಯೋಗಿಯೊಬ್ಬರು ಗಣಿತದ ಹಬ್ಬವನ್ನು ಆಯೋಜಿಸಿ, ಇತರ ಶಾಲೆಯ ಶಿಕ್ಷಕರನ್ನು ಕರೆದಿದ್ದರು. ಈ ಮುಖ್ಯ ಶಿಕ್ಷಕರಾದರೋ ತಮ್ಮ ಸಹೋದ್ಯೋಗಿ ಗಣಿತ ಶಿಕ್ಷಕ ಚಂದ್ರಭೂಷಣರವರೊಡನೆ ಕೈಜೋಡಿಸಿ ಕಾಗದಗಳು, ಬೆಂಡು ಇತ್ಯಾದಿಗಳನ್ನು ಕತ್ತರಿಸಿ ಗಣಿತದ

ಆಟಗಳನ್ನು, ಕಲಿಕಾ ಸಾಮಗ್ರಿಗಳನ್ನೂ ತಯಾರಿಸುವಲ್ಲಿ ಸಹಕರಿಸುತ್ತಿದ್ದರು. ಅವರು ತಮ್ಮ ತಂಡದಲ್ಲಿ ಯಾರು ಪರಿಶ್ರಮದಿಂದ ಕೆಲಸಮಾಡುತ್ತಾರೋ ಅವರೊಡನೆಯೆಲ್ಲಾ ಕೈ ಜೋಡಿಸುತ್ತಿದ್ದರು.

ಶಿಕ್ಷಕರು ಮತ್ತು ಮುಖ್ಯ ಶಿಕ್ಷಕರು, ಮಕ್ಕಳಿಗೆ ಉತ್ತಮವಾದದ್ದು ದೊರಕುವಂತೆ ಮಾಡಲು ಒಗ್ಗೂಡಿ ಕೈ ಜೋಡಿಸಿ ಕೆಲಸ ಮಾಡುವುದರ ಚಿತ್ರಣವನ್ನು ಈ ಶಾಲೆ ನೀಡುತ್ತದೆ. ಅಜೀಮ್ ಪ್ರೇಮ್‌ಜೀ ಪ್ರತಿಷ್ಠಾನದ ಶಿಕ್ಷಕ ಕಲಿಕಾ ಕೇಂದ್ರಗಳ ಚಟುವಟಿಕೆಗಳಿಗೆ ನಿಯಮಿತವಾಗಿ ಬರುತ್ತಿದ್ದರು ಮತ್ತು ಪಾಲ್ಗೊಳ್ಳುತ್ತಿದ್ದರು, ಹಾಗೂ ಓದಲು, ಕಲಿಯಲು ನಿರಂತರ ಉತ್ಸಾಹ ಹೊಂದಿದ್ದರು. ಅಷ್ಟಲ್ಲದೇ ಸಮೂಹದಲ್ಲಿನ (ಕ್ಲಸ್ಟರ್) ಎಲ್ಲರೂ ಮತ್ತು ಶಿಕ್ಷಕ ಸಮುದಾಯದವರು ಅವರಿಗೆ ಗೌರವವನ್ನೀಯುತ್ತಾರೆ. ಇತ್ತೀಚೆಗೆ ಅವರಿಗೆ ರಾಷ್ಟ್ರಪತಿ ಪುರಸ್ಕಾರವೂ ಜನ್-ಜ್ಞಾನ ಕಾರ್ಯಕ್ರಮವನ್ನು ಚೆನ್ನಾಗಿ ಆಯೋಜಿಸಿದ್ದಕ್ಕಾಗಿ ಲಭಿಸಿದೆ. ಅವರ ಸ್ಫೂರ್ತಿಯ ಬಗ್ಗೆ ಹೇಳುತ್ತಾ, ತಾನು ಮಕ್ಕಳಿಗೆ ಎಷ್ಟು ಸಾಧ್ಯವೋ ಅಷ್ಟು ಒಳ್ಳೆಯ ಕೆಲಸ ಮಾಡಲೇ ಬೇಕು, ಏಕೆಂದರೆ, ತಮಗೆ ಆ ಮಕ್ಕಳಿಂದಲೇ ಒಂದು ವೃತ್ತಿ ಇರುವುದು ಮತ್ತು ತನ್ನ ಕೆಲಸಕ್ಕೆ ಪ್ರಾಮಾಣಿಕವಾಗಿ ನ್ಯಾಯ ಒದಗಿಸುವುದು ಅದರೊಟ್ಟಿಗೆ ಅಂತಹ ಸಧೃಡ ಹಿನ್ನೆಲೆ ಇಲ್ಲದ ಮಕ್ಕಳಿಗೆ ಏನನ್ನಾದರೂ ಮಾಡಬೇಕು - ಈ ಯೋಚನೆಗಳೇ ನನ್ನನ್ನು ಕೆಲಸಕ್ಕೆ ಹಚ್ಚುವುದು[1] ಎಂದು ಹೇಳಿದರು. ರಜೆ ದಿನಗಳಲ್ಲೂ ಕೂಡ ಅವರು ತಮ್ಮ ಸ್ವಂತ ಊರಿಗೆ ಹೋಗಿ ಅಲ್ಲಿಯ ಶಾಲೆ, ಶಿಕ್ಷಕರೊಂದಿಗೆ ತೊಡಗಿಸಿಕೊಂಡು ಶಿಕ್ಷಣದ ಗುಣಮಟ್ಟ ಹೆಚ್ಚಿಸುವ ಬಗ್ಗೆ ಅವರಲ್ಲಿ ಸ್ಫೂರ್ತಿ ತುಂಬುತ್ತಾರೆ.

ದುರಾದೃಷ್ಟವಶಾತ್ ನಾನು ಬೇರೆ ಕೆಲಸಗಳಲ್ಲಿ ತೊಡಗಿಕೊಂಡಿದ್ದರಿಂದ ಅವರ ಬೀಳ್ಕೊಡುಗೆ ಕಾರ್ಯಕ್ರಮವನ್ನು ತಪ್ಪಿಸಿಕೊಂಡೆ. ಕೆಲವು ದಿನಗಳ ನಂತರ ನಾನು ಆ ಶಾಲೆಗೆ ಭೇಟಿ ನೀಡಿದಾಗ ಅವರಿಲ್ಲದ ಬಗ್ಗೆ ಮಾತನಾಡಿದ್ದೆ. ಭಜನ್ ಸಿಂಗಜೀ (ಸುನಾಲಿಯ ಹಿರಿಯ ಪ್ರಾಥಮಿಕ ಶಾಲೆಯ ಶಿಕ್ಷಕ) ಹೇಳುವಂತೆ ಅದು ಸುಮಾರು ಎಂಟ್ಹತ್ತು ವರ್ಷಗಳ ಪಯಣ, ನಮಗೆ ಅವರಿರುವುದರಿಂದ ಎಲ್ಲವೂ ಸುಲಲಿತವೂ, ನಿರಾಳವೂ ಆಗಿ ಬಿಟ್ಟಿತ್ತು, ಏಕೆಂದರೆ ಅವರು ಹೇಗಾದರೂ ಕೆಲಸ ನಿರ್ವಹಿಸುತ್ತಾರೆಂಬ ಧೈರ್ಯ. ಈಗ ಅವರಿಲ್ಲದೇ ಶಾಲೆ ನಡೆಸುವುದು ನಮಗೆ ಕಷ್ಟವಾಗುತ್ತಿದೆ. ಅವರು ಶಾಲೆಯಲ್ಲಿಲ್ಲ ಎಂಬುದನ್ನು ನಂಬಲೂ ಆಗುತ್ತಿಲ್ಲ. ನಾನು ಆಗಾಗ ಕಡತಗಳ ಮತ್ತು ದಾಖಲೆಗಳ ಬಗ್ಗೆ ವಿಚಾರಿಸುತ್ತೇನೆ. ಅವರು (ಸತ್ಯಪಾಲ್ ಅವರು) ದೂರವಾಣಿ ಮೂಲಕವೇ ಅವುಗಳು ಎಲ್ಲಿವೆ ಎಂದು ಹೇಳಿಬಿಡುತ್ತಾರೆ. ಅಷ್ಟೇ ಅಲ್ಲದೇ ಅವರು ಮುಖ್ಯ ದಾಖಲೆಗಳನ್ನು ಪೆನ್ ಡ್ರೈವ್‌ನಲ್ಲೂ ಇಟ್ಟಿದ್ದು ಅವುಗಳ ಸ್ಥಳವನ್ನೂ ಸೂಕ್ತವಾಗಿ ತಿಳಿಸುತ್ತಾರೆ. ದೂರದಿಂದಲೇ ನಮ್ಮನ್ನು ಬೆಂಬಲಿಸುತ್ತಿದ್ದಾರೆನಿಸುತ್ತದೆ ಎನ್ನುತ್ತಾರೆ ಅಲ್ಲಿದ್ದ ಇನ್ನೊಬ್ಬರು ಮೇಡಂ.

ಅವರ ಬಗ್ಗೆ ಮಕ್ಕಳೊಡನೆ ಮಾತನಾಡಿದ್ದು ಬಹಳ ಭಾವನಾತ್ಮಕವಾಗಿತ್ತು. ಅವರು ಯಾವತ್ತೂ ಕಟ್ಟು ನಿಟ್ಟಾಗಿ ಯಾರೊಡನೆಯೂ ಮಾತನಾಡಿಲ್ಲ. ಅವರು ಸಮಯಕ್ಕೆ ಸರಿಯಾಗಿ ಬರಬೇಕೆಂದಷ್ಟೇ ಎಲ್ಲರಿಗೂ ಹೇಳುತ್ತಿದ್ದರು. ಆ ವಿಷಯದಲ್ಲಿ ಅವರು ಬಹಳ ಕಟ್ಟು ನಿಟ್ಟು. ಮಳೆಯ ದಿನಗಳಲ್ಲೂ ಕೂಡ ಅವರು ಸಮಯಕ್ಕೆ ಸರಿಯಾಗಿ ಬರುತ್ತಿದ್ದರು. ಅವರು ಮುಖ್ಯ ಶಿಕ್ಷಕರಾಗಿದ್ದರೂ ಎಲ್ಲ ಚಟುವಟಿಕೆಗಳಲ್ಲೂ ಕೈಜೋಡಿಸಿ ಎಲ್ಲರಿಗೂ ಬೆಂಬಲ ನೀಡುತ್ತಿದ್ದರು. 'ನಮ್ಮನ್ನು ತಮ್ಮ ಸ್ವಂತ ಮಕ್ಕಳಂತೆಯೇ ಕಾಣುತ್ತಿದ್ದರು ಎಂದೇ ಅವರು ನಮ್ಮ ನೆನಪಿನಲ್ಲುಳಿಯುತ್ತಾರೆ' ಎಂದು ಹುಡುಗಿಯೊಬ್ಬಳು ಹೇಳುತ್ತಾಳೆ. ನಾನು ಈರುಳ್ಳಿಯ ಸೀಳನ್ನು ಸೂಕ್ಷ್ಮ ದರ್ಶಕದ ಮೂಲಕ ತೋರಿಸುತ್ತಿದ್ದಾಗ ಅವರೆಲ್ಲ ಅದನ್ನು ನೋಡಿದ್ದೇವೆಂದು ಹೇಳಿದರು. ನಿಮಗೆ ಈ ಚಟುವಟಿಕೆಯನ್ನು ಯಾರು ಮಾಡಿಸಿದ್ದಾರೆಂದು ಕೇಳಿದಾಗ ಬಂದ ಉತ್ತರ ಮುಖ್ಯ ಶಿಕ್ಷಕರೆಂದು. ಅಂದರೆ ಈರುಳ್ಳಿ ಸಿಪ್ಪೆಯ ಚಟುವಟಿಕೆಯನ್ನೂ ಇತರ ವಿಜ್ಞಾನದ ಅವಧಿಯ ಜೊತೆಗೇ ಮಾಡಿದ್ದರು. ಮಕ್ಕಳು ತಮ್ಮ ವಿಚಾರಗಳನ್ನು ಹಂಚಿಕೊಳ್ಳಲು ಅವರು ಸದಾಕಾಲ ಅವಕಾಶ ನೀಡುತ್ತಿದ್ದರು. ಅವರ ಜೊತೆ ಕೆಲಸ ಮಾಡಿದ್ದ ಭಜನ್‌ಜೀ ಪ್ರಕಾರ ಅವರು ಸಾಮಾನ್ಯರಂತಲ್ಲ. ಯಾವುದೇ ಸಂದರ್ಭದಲ್ಲೂ ಉದ್ವೇಗಕ್ಕೊಳಗಾಗದೇ ಎಲ್ಲ ಮಾತುಕತೆ ಸಂವಾದಗಳಲ್ಲಿ ಸಮಾಧಾನದಿಂದ ಇರುತ್ತಿದ್ದರು. ಅವರಿಂದ ನಾನು ಸಮಾಧಾನದಿಂದಿರುವುದನ್ನು ಕಲಿತೆ. ಆದರೂ ಕೆಲವೊಮ್ಮೆ ಕೆರಳುತ್ತೇನೆ. ಅವರಂತಹ ಸಹೋದ್ಯೋಗಿ ದೊರೆಯುವುದು ಕಷ್ಟ. ವಿಶಿಷ್ಟ ಮತ್ತು ವಿಶೇಷ ವ್ಯಕ್ತಿಯಾಗಿದ್ದ ಅವರ ಇಲ್ಲದಿರುವಿಕೆ ಸದಾ ಕಾಡುತ್ತದೆ. ನಾನು ಹೆಚ್ಚಿನ ವಿದ್ಯಾರ್ಥಿಗಳೊಂದಿಗೆ ಮಾತನಾಡುತ್ತಾ ಅವರ ನಿವೃತ್ತಿಯ ನಂತರ ಏನೆನಿಸುತ್ತದೆಂದು ಕೇಳಿದೆ. ಎಲ್ಲರೂ ಅವರ ಬೀಳ್ಕೊಡುಗೆಯ ದಿನ ಅತ್ತದ್ದನ್ನು, ಈಗಲೂ ಅವರಿಲ್ಲದ್ದು ಕಾಡುತ್ತದೆಂದೂ ಹೇಳಿದರು. ಮತ್ತೋರ್ವ ಹುಡುಗಿ ಅವರೆಂದೂ ಒರಟಾಗಿ ಮಾತನಾಡದ್ದನ್ನು ನೆನೆಸಿಕೊಂಡಳು. ಎಲ್ಲ ಸಮಯದಲ್ಲೂ ನೆರವಾಗುತ್ತಿದ್ದುದನ್ನೂ ತಿಳಿಸಿದಳು. ಒಂದು ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ತಮ್ಮ ಕೈಯಿಂದಲೇ ಹಣಕೊಟ್ಟು ಕೃತಕ ಆಭರಣಗಳನ್ನು ತಂದದ್ದೂ ಉಳಿದ ಅಭರಣಗಳನ್ನು ಎಲ್ಲರೊಡನೆ ಸೇರಿ ತಾವೇ ಮಾಡಿದ್ದನ್ನೂ ಹೇಳಿದಳು. ಪ್ರಾಯಶಃ ಆ ಕ್ಷೇತ್ರದ ಪ್ರತಿಯೊಬ್ಬ ಶಿಕ್ಷಕರಿಗೂ ಅವರ ಬಗ್ಗೆ ಅವರ ಶಾಲೆಗಳನ್ನು ಬೆಳೆಸುವಲ್ಲಿ ಅವರ ಕೊಡುಗೆಯ ಬಗ್ಗೆ ಅರಿವಿದೆ. ಮುಂಚಿನ ಶಾಲೆ ಅಥವಾ ಹಿಪ್ರಾಶಾ ಸುನಾಲಿ ಇರಬಹುದು, ಅವರ ಕೆಲಸಗಳು ಶಾಲೆಗ ಒಂದು ರೂಪು ಕೊಟ್ಟದ್ದಷ್ಟೇ ಅಲ್ಲದೇ ಸಹಕಾರದ, ಮುಕ್ತತೆಯ ಮತ್ತು ಹಂಚಿಕೊಳ್ಳುವ ಸಂಸ್ಕೃತಿಯನ್ನು ಬೆಳೆಸಿವೆ.

ಮನಸ್ಸಿದ್ದರೆ ಮಾರ್ಗ ಎಂಬ ನಾಣ್ನುಡಿ ಇದೆ. ಅಂದರೆ ಯಾವುದೇ ಗುರಿಯೆಡೆಗೆ ಮನಸ್ಸಿಟ್ಟು ಕೆಲಸ ಮಾಡಿದರೆ ಕೆಲಸವೂ ಸುಲಭವಾಗುತ್ತದೆ ಜನರೂ ಕೈಜೋಡಿಸುತ್ತಾರೆ. ಯಾವಾಗ ಸತ್ಯಪಾಲ್ ಅವರು ಶಾಲೆಯಲ್ಲಿ ಆರೋಗ್ಯಕರ ವಾತಾವರಣವನ್ನು ಕಟ್ಟಿ ತಮ್ಮ ತಂಡದೊಂದಿಗೆ ಅದನ್ನು ಬೆಳೆಸಿದರೋ ಆಗ ಶಿಕ್ಷಣ ಇಲಾಖೆಯ ಇತರ ಅಧಿಕಾರಿಗಳು ತಮ್ಮ ತಂಡದೊಂದಿಗೆ ಇವರಿಗೆ ಬೆಂಬಲವಾಗಿ ನಿಂತರು. ಅವರ ಪ್ರಕಾರ ಸಮುದಾಯದ ಕೈ ಜೋಡಿಸುವಿಕೆ ಇಲ್ಲದೇ ಶಾಲಾ ಅಭಿವೃದ್ಧಿಯಲ್ಲಿ ಏನನ್ನೂ ಮಾಡಲಾಗದು. ಹಳ್ಳಿಯ ಜನ ಎಲ್ಲ ಸಮಯದಲ್ಲೂ ತಮ್ಮೊಡನೆ ಕೈ ಜೋಡಿಸಿದ್ದಾರೆ. ಶಾಲೆಯಲ್ಲಿ ವಿದ್ಯುತ್ ವ್ಯವಸ್ಥೆ ಇಲ್ಲದಿದ್ದರೂ ತಾವು ಮಕ್ಕಳಿಗೆ ಕಂಪ್ಯೂಟರ್ ಕಲಿಸುವ ಸಲುವಾಗಿ ಅಧಿಕಾರಿಗಳೊಡನೆ, ಕಂಪ್ಯೂಟರ್ ಕಳುಹಿಸುವ ಬಗ್ಗೆ ಮಾತನಾಡಿ, ಒಪ್ಪಿಗೆ ಪಡೆದದ್ದು. ಆ ನಂತರ ಹಳ್ಳಿಯ ಮುಖ್ಯಸ್ಥರು ಒಂದೇ ದಿನದಲ್ಲಿ ಎಲ್ಲರೊಡಗೂಡಿ ವಿದ್ಯುತ್ ಕಂಬ ನೆಡಿಸಿ ಶಾಲೆಗೆ ವಿದ್ಯುತ್ ಸಂಪರ್ಕ ತಂದದ್ದನ್ನು ನೆನಪಿಸಿಕೊಂಡರು. ಇಲ್ಲಿನ ಶಾಲಾ ನಿರ್ವಹಣಾ ಮಂಡಳಿಯು ಉತ್ತಮ ನಿರ್ವಹಣೆಗಾಗಿ, ಒಮ್ಮೆ ಪ್ರಶಸ್ತಿಯನ್ನೂ ಪಡೆದಿದೆ. ಮತ್ತೊಂದು ಘಟನೆಯನ್ನೂ ನೆನಪಿಸುತ್ತಾರೆ. ಶಾಲೆಯ ಕಟ್ಟಡವು

[1] ಉತ್ತರಾಖಂಡ್ : ಉಮ್ಮೀದ್ ಜಾಗ್ತೇ ಶಿಕ್ಷಕ್, ಅಜೀಂ ಪ್ರೇಮ್‌ಜೀ ಪ್ರತಿಷ್ಠಾನ

ಕಾಡಿನ ಪಕ್ಕದಲ್ಲೇ ಇದೆ. ಜೋರು ಗಾಳಿಯಿಂದಾಗಿ ಎತ್ತರದ ದಾರು ಮರಗಳು ಶಾಲೆಯ ಮೇಲೆ ಎರಡು ಬಾರಿ ಬಿದ್ದಿವೆ, ಅದೃಷ್ಟವಶಾತ್ ಎರಡು ಬಾರಿಯೂ ಶಾಲೆಯ ರಜೆಯ ಸಮಯ. ಸತ್ಯಪಾಲ್ ಮತ್ತು ಸಮುದಾಯದವರ ಕೋರಿಕೆಯ ಮೇರೆಗೆ ಸರ್ವ ಶಿಕ್ಷಾ ಅಭಿಯಾನದ ಅಧಿಕಾರಿಗಳು ಹೊಸ ಕಟ್ಟಡಕ್ಕಾಗಿ ಹಣ ಮಂಜೂರು ಮಾಡಿದರು. ವ್ಯವಸ್ಥೆಯೇ ಅವರ ಇತರ ಬೇಡಿಕೆಗಳಾದ ಕಂಪ್ಯೂಟರ್, ಟಿವಿ ಮುಂತಾದುವುಗಳನ್ನೂ ಕೊಟ್ಟಿದೆ. ಅವರ ಕೆಲಸಗಳನ್ನು ಅಜೀಂ ಪ್ರೇಮ್ಜಿ ಪ್ರತಿಷ್ಠಾನವು ಗುರುತಿಸಿದೆ. ಉತ್ತರಾಖಂಡದಲ್ಲಿನ ಅವರ ವೃತ್ತಿಜೀವನದ ಬಗ್ಗೆ ಲೇಖನವನ್ನು ಉಮ್ಮೀದ್ ಜಾಗ್ತೇ ಶಿಕ್ಷಕ್ 2 ಎನ್ನುವ ಶೀರ್ಷಿಕೆಯಲ್ಲಿ ಪ್ರಕಟಿಸಿದೆ. ಅವರ ನಿವೃತ್ತಿಯ ಸಮಯದಲ್ಲಿ ಇಡೀ ಹಳ್ಳಿ , ಶಿಕ್ಷಕ ಸಮುದಾಯ ಮತ್ತು ಪುರೋಲಾದ ಅಜೀಂ ಪ್ರೇಮ್‌ಜೀ ಪ್ರತಿಷ್ಠಾನದ ಸದಸ್ಯರು ಬೀಳ್ಕೊಡುಗೆ ಮತ್ತು ಗೌರವ ಸಮರ್ಪಣೆ ನೀಡಿದರು. ಸರ್ಕಾರೀ ಶಾಲೆಯ ಶಿಕ್ಷಕರು ಪರಿಶ್ರಮ ಹಾಕುವುದಿಲ್ಲ ಮತ್ತು ತಮ್ಮ ಕೆಲಸದ ಬಗ್ಗೆ ಆಸ್ಥೆ ಹೊಂದಿರುವುದಿಲ್ಲ ಎಂಬ ಸಾಮಾನ್ಯ ಮಾತಿಗೆ ಇವರ ಪರಿಶ್ರಮ ಪ್ರತಿನುಡಿಯೆನಿಸುತ್ತದೆ.

"ಅಂಡರ್ ಅಚೀವಿಂಗ್ ಸ್ಕೂಲ್" ಎಂಬ ಪುಸ್ತಕದಲ್ಲಿ ಜಾನ್ ಹೋಲ್ಟ್, ವಿದ್ಯಾರ್ಥಿಗಳು ಮತ್ತು ಶಿಕ್ಷಕರ ನಡುವೆ ಒಂದು ಗೌರವದ ಸಂಬಂಧ ಇದ್ದು, ತಮ್ಮ ಭಾವನೆಗಳನ್ನು ಹಂಚಿಕೊಳ್ಳುವ ಅವಕಾಶ ಇರಬೇಕೆಂದು ಹೇಳುತ್ತಾರೆ. ಸತ್ಯಪಾಲ್ ಅವರ ಪ್ರಯತ್ನಗಳ ಫಲವಾಗಿ ಸುನಾಲಿಯ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಮಕ್ಕಳು ಮತ್ತು ಶಿಕ್ಷಕ ವರ್ಗದವರ ನಡುವೆ ಆರೋಗ್ಯಕರ ಸಂಬಂಧವನ್ನು ನೋಡಬಹುದು. ನಮ್ಮ ಶಾಲೆಯ ಪ್ರಾಂಶುಪಾಲರೊಂದಿಗಿನ ನನ್ನ ಅನುಭವ ಕಾಠಿಣ್ಯ0ದ ಶಿಸ್ತು ಮತ್ತು ಶಿಕ್ಷೆಯದು. ನಿಯಮಗಳನ್ನು ಮುರಿದವರನ್ನು ಶಿಕ್ಷಿಸುವುದೇ ಅವರ ಮುಖ್ಯ ಕರ್ತವ್ಯವಾಗಿತ್ತು. ಯಾವಾಗ ಸತ್ಯಪಾಲ್ ಅವರ ಶಾಲೆಯಲ್ಲಿನ ಶಿಸ್ತು ಮತ್ತು ಮಕ್ಕಳೊಡನೆ ಮತ್ತು ಸಹ ಶಿಕ್ಷಕರೊಡನೆಯ ಅವರ ಸ್ನೇಹ ಸಂಬಂಧವನ್ನು ನೋಡಿದೆನೋ ಆಗ ನನಗೆ ರಾಪಕ್ರ (ಎನ್‌ಸಿಎಫ್) 2005ರಲ್ಲಿ ಹೇಳಿದ ಶಿಸ್ತು ಎಂದರೇನೆಂದು ಅನುಭವವಾಯಿತು. ಸ್ವಾತಂತ್ರ್ಯ, ಆಯ್ಕೆ ಮತ್ತು ಸ್ವಾಯತ್ತತೆಯನ್ನು ಶಿಕ್ಷಕರು, ಮಕ್ಕಳಲ್ಲಿ ಹೆಚ್ಚಿಸುವುದಕ್ಕೋಸ್ಕರ ಶಿಸ್ತು ಅಗತ್ಯವಿದೆ. ನಿಯಮಗಳನ್ನು ಮಾಡುವಲ್ಲಿ ಮಕ್ಕಳು ಪಾಲ್ಗೊಳ್ಳಬೇಕು ಹಾಗೂ ಆ ನಿಯಮಗಳ ಹಿಂದಿನ ಅಗತ್ಯತೆಗಳ ಅರಿವಾಗಿ ಮಕ್ಕಳು ಜವಾಬ್ದಾರಿಯನ್ನರಿತು ಕಟ್ಟು ಕಟ್ಟಳೆಗಳನ್ನು ಪಾಲಿಸುತ್ತಾರೆ ಎಂದು ಅದರಲ್ಲಿ ಹೇಳಿದೆ. ಇಲ್ಲಿ ಮಕ್ಕಳನ್ನು ಶಿಕ್ಷಿಸದೇ ಅವರಲ್ಲಿ ತಾವೇ ಶಿಸ್ತಿನಿಂದ ಜವಾಬ್ದಾರಿಯುತ ನಡವಳಿಕೆಯನ್ನು ತಮ್ಮದಾಗಿಸಿಕೊಳ್ಳುವಂತೆ ಮಕ್ಕಳು ಬೆಳೆಯುವುದೇ ಮುಖ್ಯ. ಹೀಗೆ ಮಾಡುವುದರಿಂದ ಮಕ್ಕಳು ಒಟ್ಟು ನಿರ್ಧಾರ ಕೈಗೊಳ್ಳುವುದನ್ನು, ಸ್ವಯಂ ಆಡಳಿತದ ಸೂಕ್ಷ್ಮಗಳನ್ನು ಮತ್ತು ಚಿಂತನೆಗಳನ್ನು ಕಲಿಯುತ್ತಾರೆ (ರಾಪಕ್ರ, 2005)

ಗ್ರಾಮಸ್ಥರೇ ನೀಡಿದ ಬೀಳ್ಕೊಡುಗೆ

ತಮ್ಮದೇ ಸಂಪನ್ಮೂಲಗಳನ್ನು ಕ್ರೋಢೀಕರಿಸಿ ವಿಶೇಷ ಊಟದೊಡನೆ 8ನೇ ತರಗತಿಯ ಮಕ್ಕಳನ್ನು ಬೀಳ್ಕೊಡುವುದು ಸಹ ಶಿಕ್ಷಕರಾದ ಚಂದ್ರಭೂಷಣ್ ಮತ್ತು ಭಜನ್ ಅವರೊಂದಿಗೆ ಸೇರಿ ಸತ್ಯಪಾಲ್ ಅವರು ನಡೆಸಿಕೊಂಡು ಬಂದಿರುವ ಸಂಪ್ರದಾಯ. ಆ ಸಂಪ್ರದಾಯವನ್ನು ಗ್ರಾಮಸ್ಥರೂ ಉಳಿಸಿಕೊಂಡು ಸತ್ಯಪಾಲರಿಗೆ ಬೀಳ್ಕೊಡುಗೆ ನೀಡಿತು. ಸತ್ಯಪಾಲರಿಗೆ ಬೀಳ್ಕೊಡಲು ಅರ್ಧದಷ್ಟು ಹಳ್ಳಿಯೇ ಸೇರಿತ್ತು. ದುರದೃಷ್ಟವೆಂದರೆ, ನಾನು ಆ ಸಮಾರಂಭವನ್ನು ತಪ್ಪಿಸಿಕೊಂಡೆ. ನನ್ನ ಸಹೋದ್ಯೋಗಿಗಳು ಹೇಳಿದಂತೆ, ಊರಿನವರು ಕೊಂಬು ಕಹಳೆಯೊಡನೆ ಬಂದು ತಾವು ಬೆಳೆದ ಕಾಳು, ಹಣ್ಣು ಮುಂತಾದ ಉಡುಗೊರೆಗಳೊಡನೆ ಶುಭ ಹಾರೈಸಿ ಬೀಳ್ಕೊಟ್ಟರು. ಹಿಂದಿನ ಸಹೋದ್ಯೋಗಿಗಳು, ಶಾಲೆಯ ಸಿಬ್ಬಂದಿ ವರ್ಗ ಮತ್ತೂ ಹಲವು ಮಂದಿ ತಮ್ಮ ನೆಚ್ಚಿನ ಮುಖ್ಯ ಶಿಕ್ಷಕನಿಗೆ ಶುಭ ಹಾರೈಸಲು ಸೇರಿದ್ದರಂತೆ. ಮಕ್ಕಳು, ಶಿಕ್ಷಕರು ತಮ್ಮ ಮಾತುಗಳನ್ನು ಹಂಚಿಕೊಳ್ಳುವಾಗ ಗದ್ಗದಿತರಾಗಿದ್ದರು. ಸತ್ಯಪಾಲ್ ಕೂಡ ಈ ಭಾವುಕ ಕ್ಷಣದಲ್ಲಿ ಕಣ್ಣೀರಿಟ್ಟರಂತೆ. ಎಲ್ಲರೂ ಮ್ಲಾನ ವದನರಾಗಿಯೇ ಅವರನ್ನು ಬೀಳ್ಕೊಟ್ಟರು[2]. ಜವಾಬ್ದಾರಿಯುತ, ನಮ್ರತೆಯ ಮತ್ತು ಸಹಬಾಳ್ವೆಯ ಪರಂಪರೆಯನ್ನು ನಮಗೆಲ್ಲ ಸತ್ಯಪಾಲರು ತಿಳಿಸಿ ಹೋಗಿದ್ದಾರೆ. ತಮ್ಮ ಸ್ವಂತ ಊರಾದ ಸಹರಾನ್ಪುರದಿಂದ ಕರೆ ಮಾಡಿ ಮಾತನಾಡುತ್ತಾರೆ, ಕಾರ್ಯಾಗಾರಗಳಲ್ಲಿ ಪಾಲ್ಗೊಂಡು ತಮ್ಮ ಆಸಕ್ತಿಯನ್ನು ಇನ್ನೂ ತೋರುತ್ತಾರೆ. ಈ ತರದ ವ್ಯಕ್ತಿಗಳು ಬೇರೆಯವರ ಮೇಲೆ ಒತ್ತಡ ಹೇರದೇ ತಾವು ನಿಷ್ಠೆಯಿಂದ ತಮ್ಮ ಕರ್ತವ್ಯ ನಿರ್ವಹಿಸುತ್ತಾರೆ. ಅವರ ನಿಷ್ಠೆ ಮತ್ತು ಉತ್ಸಾಹವೇ ಇತರರು ಹಲವು ವಿಷಯಗಳನ್ನು ತಿಳಿಯುವಂತೆ ಮಾಡುತ್ತದೆ. ನನಗೆ ಒಬ್ಬ ಮುಖ್ಯ ಶಿಕ್ಷಕ ಶಾಲೆಗೆ ಮತ್ತು ಸಮುದಾಯಕ್ಕೆ ಏನನ್ನು ನೀಡಬಹುದು, ಅದೂ ಅತಿಯಾದ ಶಿಸ್ತು, ಶಿಕ್ಷೆ ಮತ್ತು ಒತ್ತಡ ಇಲ್ಲದೇ ಎಂಬುದರ ಉತ್ತಮ ಉದಾಹರಣೆಯಾಯಿತು.


** **Mohammad Zafar** works with the science team of Azim Premji Foundaton at Utarkashi, Utarakhand. He may be contacted at mohammad.zafar@azimpremjifoundaton.org

ಮೊಹಮ್ಮದ್ ಜಾಫರ್ ಅವರು ಅಜೀಂ ಪ್ರೇಮ್‌ಜೀ ಪ್ರತಿಷ್ಠಾನ, ಉತ್ತರಕಾಶಿ, ಉತ್ತರಖಾಂಡದಲ್ಲಿ ಕೆಲಸ ಮಾಡುತ್ತಾರೆ. ಅವರನ್ನು mohammad.zafar@azimpremjifoundaton.org ಮೂಲಕ ಸಂಪರ್ಕಿಸಬಹುದು.


[2] ಈ ಬೀಳ್ಕೊಡುಗೆ ಸಮಾರಂಭದ ವಿವರಗಳನ್ನು ನೀಡಿದ ನನ್ನ ಸಹೋದ್ಯೋಗಿ ಶ್ರೀಯುತ ಅನುಪ ದುಬೇ ಅವರಿಗೆ ವಂದನೆಗಳು.